# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1001(1247)

ಸದಸ್ಯರ ಹೆಸರು : ಶ್ರೀ ಕುಶಾಲಪ್ಪ ಎಂ.ಪಿ (ಸುಜಾ)
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 07.03.2022

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯ ಗೋಣಿಕೊಪ್ಪಲು ತಾಲ್ಲೂಕಿನ ತಿತಿಮತಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಚೇಣಿಹಡ್ಲು ಗಿರಿಜನರ ಹಾಡಿಯಲ್ಲಿ ಅವೈಜ್ಞಾನಿಕ ರೈಲ್ವೆ ಬ್ಯಾರಿಕೇಡ್ ಅಳವಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊಡಗು ಜಿಲ್ಲೆಯ ಗೋಣಿಕೊಪ್ಪಲು ತಾಲ್ಲೂಕಿನ ತಿತಿಮತಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಆನೆಚೌಕೂರು ವನ್ಯಜೀವಿ ವಲಯದ ಗಡಿ ಭಾಗದಲ್ಲಿ ಮರಪಾಲ ಬ್ರಿಡ್ಜ್ ನಿಂದ ಚೇಣಿಹಡ್ಲು ಗೇಟ್ ವರಗೆ ರೈಲ್ವೆ ಬ್ಯಾರಿಕೇಡ್ ಕಾಮಗಾರಿ ನಿರ್ವಹಿಸಲು ನುರಿತ ತಜ್ಞ ಅಭಿಯಂತರರಿಂದ ಆ ಸ್ಥಳದ ಮಣ್ಣಿನ ಮಾದರಿಗೆ ಅನುಗುಣವಾಗಿ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ತಯಾರಿಸಿ ಕರ್ನಾಟಕ ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ, ಮಂಜೂರಾತಿ ಪಡೆಯಲಾಗಿರುತ್ತದೆ. ಟೆಂಡರ್ ತಾಂತ್ರಿಕ ಹಾಗೂ ಆರ್ಥಿಕ ಬಿಡ್ ನಲ್ಲಿ ವಿಜೇತರಾದ ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಿ ಕಾಮಗಾರಿ ಪ್ರಾರಂಭಿಸಲಾಗಿದ್ದು, ಸದರಿ ಕಾಮಗಾರಿಯು ಅವೈಜ್ಞಾನಿಕ ರೀತಿಯಲ್ಲಿ ಪ್ರಾರಂಭಿಸಿರುವುದಿಲ್ಲ.<br><br>ಆನೆಚೌಕೂರು ವನ್ಯಜೀವಿ ವಲಯದ ಚೇಣಿಹಡ್ಲು ಮತ್ತು ಆಯಿರ ಹೊಸಹಳ್ಳಿಯ ಹಾಡಿಗಳ ಪಕ್ಕದ ಅರಣ್ಯದ ಗಡಿಯಲ್ಲಿಯೇ ಮರಪಾಲ ಸೇತುವೆಯಿಂದ ಕೆ.ಎಂ. ಕೊಲ್ಲಿಯವರಗೆ 2.564 ಕಿ.ಮೀ. ಮತ್ತು ಚೇಣಿಹಡ್ಲು ಗೇಟ್ ನಿಂದ ಮರಪಾಲ ಸೇತುವೆವರೆಗೆ 0.845 ಕಿ.ಮೀ. ಉದ್ದಕ್ಕೆ ರೈಲ್ವೆ ಬ್ಯಾರಿಕೇಡ್ ಅನ್ನು ವಿವರವಾದ ಯೋಜನಾ ವರದಿ (ಡಿಪಿಆರ್) ಪ್ರಕಾರ ನಿರ್ಮಿಸಲು ಯೋಜಿಸಲಾಗಿತ್ತು. ಈ ಎರಡು ಹಾಡಿಗಳ ಸುತ್ತಲೂ ಈ ಹಿಂದೆ ಈಗಾಗಲೇ ಆನೆ ನಿರೋಧಕ ಕಂದಕಗಳನ್ನು ನಿರ್ಮಿಸಲಾಗಿರುತ್ತದೆ. ರೈಲ್ವೆ ಬ್ಯಾರಿಕೇಡ್ ಮಾಡಲು ಉದ್ದೇಶಿಸಿದ್ದ ಈ ಪ್ರದೇಶದ ಮಾರ್ಗದಲ್ಲಿ ಈಗಾಗಲೇ ನಿರ್ಮಿಸಿದ್ದ ಆನೆ ನಿರೋಧಕ ಕಂದಕಗಳು ಇದ್ದು, ಕೆ.ಎಂ.ಕೊಲ್ಲಿ ಭಾಗದಲ್ಲಿ 2.564 ಕಿ.ಮೀ. ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಕಾಮಗಾರಿ ಪೈಕಿ 0.250 ಕಿ.ಮೀ. ಕಾಮಗಾರಿ ಪೂರ್ಣಗೊಂಡ ನಂತರ ಚೇಣಿಹಡ್ಲು ಹಾಗೂ ಆಯಿರ ಹೊಸಹಳ್ಳಿಯ ಗಿರಿಜನರಿಂದ ಪ್ರತಿಭಟಣೆ ಉಂಟಾದ ಕಾರಣ ಕಾಮಗಾರಿಯನ್ನು ಸ್ಥಗಿತ ಗೊಳಿಸಲಾಗಿರುತ್ತದೆ. |
| ಆ) | ಅಲ್ಲಿನ ಗಿರಿಜನರು ಈ ಅವೈಜ್ಞಾನಿಕ ರೈಲ್ವೆ ಬ್ಯಾರಿಕೇಡ್ ಗಳಿಂದ ತುಂಬಾ ತೊಂದರೆ ಅನುಭವಿಸುತ್ತಿರುವ ಹಾಗೂ ಸ್ಥಳಾಂತರ ಮಾಡುವ ಕುರಿತು ವಿನಂತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; (ಮಾಹಿತಿ ನೀಡುವುದು) | |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಈ ಅವೈಜ್ಞಾನಿಕ ಬ್ಯಾರಿಕೇಡ್ ಅಳವಡಿಕೆಯನ್ನು ಯಾವ ವರ್ಷದಿಂದ ನಿಲ್ಲಿಸಲಾಗುವುದು; ಇನ್ನೂ ಎಷ್ಟು ಸಮಯ ಬೇಕಾಗಬಹುದು; ಈ ಬಗ್ಗೆ ಸರ್ಕಾರದ ಕ್ರಮವೇನು? | ರೈಲ್ವೆ ಬ್ಯಾರಿಕೇಡ್ ಕಾಮಗಾರಿಯು ಖಾಯಂ/ಶಾಶ್ವತ ನಿರ್ಮಾಣವಾಗಿದ್ದು, ಈ ಕಾಮಗಾರಿಯನ್ನು ಅರಣ್ಯ ಪ್ರದೇಶದ ಗಡಿಯುದ್ದಕ್ಕೂ ನಿರ್ಮಿಸಲಾಗುತ್ತಿದೆ. ಆದಾಗ್ಯೂ, ಹಾಡಿಯೊಳಗೆ ಬೆಳೆ ಹಾನಿಯನ್ನು ತಪ್ಪಿಸಲು ಅವಶ್ಯಕತೆವಿದ್ದಲ್ಲಿ ಅನುದಾನದ ಲಭ್ಯತೆಯ ಮೇರೆಗೆ ಹಾಡಿಯ ಸುತ್ತಲು ಈಗಾಗಲೇ ಇರುವ ಆನೆ ತಡೆ ಕಂದಕಗಳನ್ನು ಬಲಪಡಿಸಲಾಗುವುದು ಹಾಗೂ ಅವಶ್ಯವಿದ್ದಲ್ಲಿ ಸೌರತಂತಿ ಬೇಲಿಯನ್ನು ನಿರ್ಮಿಸಲಾಗುವುದು. |

ಸಂಖ್ಯೆ: ಅಪಜೀ 41 ಎಫ್‌ಡಬ್ಲ್ಯೂಎಲ್ 2022

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು